# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1202 |
| ಮಾನ್ಯ ಸದಸ್ಯರ ಹೆಸರು | ಶ್ರೀ ಅರವಿಂದ ಕುಮಾರ್ ಅರಳಿ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 23.12.2021 |
| ಉತ್ತರಿಸಬೇಕಾದವರು | ಅಬಕಾರಿ ಸಚಿವರು |

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಬೀದರ್ ಜಿಲ್ಲೆಯಲ್ಲಿ ಸರ್ಕಾರದಿಂದ ಅನುಮತಿ ಪಡೆದಿರುವ ಎಮ್.ಎಸ್. ಐ.ಎಲ್, ಹೋಟೆಲ್, ಬಾರ್ ಮತ್ತು ರೆಸ್ಟೋರೆಂಟ್‌ಗಳೆಷ್ಟು; ಇವುಗಳಿಂದ 2018–19 ರಿಂದ 2021–22 ರವರೆಗೆ ಬಂದಿರುವ ನಿವ್ವಳ ಲಾಭವೆಷ್ಟು; (ವಿವರ ನೀಡುವುದು)</td><td>ಬೀದರ ಜಿಲ್ಲೆಯಲ್ಲಿ 2021–22 ಸಾಲಿನಲ್ಲಿ ಇಲಾಖೆಯಿಂದ ಕಾರ್ಯನಿರ್ವಹಿಸುತ್ತಿರುವ ಎಮ್.ಎಸ್.ಐ.ಎಲ್, ಹೋಟೆಲ್, ಬಾರ್ ಅಂಡ್ ರೆಸ್ಟೋರೆಂಟ್‌ಗಳ ವಿವರ ಕೆಳಕಂಡಂತಿದೆ:
<table>
<tr><th>ಕ್ರ.ಸಂ</th><th>ಸನ್ನದು</th><th>ಕಾರ್ಯ ನಿರ್ವಹಿಸುತ್ತಿರುವ ಸಂಖ್ಯೆ</th></tr>
<tr><td rowspan="2">01</td><td>i. ಹೋಟೆಲ್ ಸಿಎಲ್–7<br>(Hotel And Boarding Houses)</td><td>32</td></tr>
<tr><td>ii. ಹೋಟೆಲ್ ಸಿಎಲ್–7A<br>(Tourist Hotel Licences)</td><td>01</td></tr>
<tr><td>02</td><td>ಬಾರ್ ಅಂಡ್ ರೆಸ್ಟೋರೆಂಟ್ ಸಿಎಲ್–9<br>(Refreshment Room (Bar))</td><td>31</td></tr>
<tr><td>03</td><td>ಎಮ್.ಎಸ್.ಐ.ಎಲ್. ಸಿಎಲ್ 11–C<br>(Retail Shop)</td><td>31</td></tr>
</table>
ಸನ್ನದುಗಳಲ್ಲಿ ಮಾರಾಟ ಮಾಡಲು ಖರೀದಿಸಿರುವ ಮದ್ಯದ ಮೇಲಿನ ಅಬಕಾರಿ ಸುಂಕ ಮತ್ತು ಹೆಚ್ಚುವರಿ ಅಬಕಾರಿ ಸುಂಕಗಳನ್ನು ಮದ್ಯ ಉತ್ಪಾದಕ ಡಿಸ್ಟಿಲರಿ/ಬ್ರಿವರೀಸ್/ ವೈನರಿ ಘಟಕಗಳ ಹಂತದಲ್ಲೇ ಸಂಗ್ರಹಿಸಲಾಗುತ್ತಿರುವುದರಿಂದ ಸರ್ಕಾರಕ್ಕೆ ಸದರಿ ಸನ್ನದುಗಳಿಂದ</td></tr>
</table>

| | | |
|---|---|---|
| | | ನೇರವಾಗಿ ಅಬಕಾರಿ ಸುಂಕವು ಸಂಗ್ರಹಿಸಲಾಗುವುದಿಲ್ಲ. ಸನ್ನದುಗಳಿಂದ ಸನ್ನದು ಶುಲ್ಕ ಮಾತ್ರ ಸಂಗ್ರಹವಾಗುತ್ತಿದ್ದು, ಕಳೆದ 04 ವರ್ಷದಲ್ಲಿ ಸಂಗ್ರಹಿಸಲಾದ ಮೊತ್ತವು ಈ ಕೆಳಕಂಡಂತೆ: |

| ವರ್ಷ | ಸನ್ನದು ಶುಲ್ಕ (ಲಕ್ಷ ರೂಗಳಲ್ಲಿ) | ಹೆಚ್ಚುವರಿ ಸನ್ನದು ಶುಲ್ಕ (ಲಕ್ಷ ರೂಗಳಲ್ಲಿ) |
|---|---|---|
| 2018–19 | 353.8 | 53.07 |
| 2019–20 | 388.8 | 58.32 |
| 2020–21 | 410.8 | 61.62 |
| 2021–22 | 319.8 | 47.97 |

| | | |
|---|---|---|
| ಆ) | ಎಮ್.ಎಸ್.ಐ.ಎಲ್. ಗೆ ಅನುಮತಿ ಪಡೆಯಲು ಅನುಸರಿಸಬೇಕಾದ ಮಾನದಂಡಗಳೇನು; | ರಾಜ್ಯದಲ್ಲಿ ಎಂ.ಎಸ್.ಐ.ಎಲ್ ಸನ್ನದುಗಳನ್ನು ಮಂಜೂರು ಮಾಡಲು ಸರ್ಕಾರ ಅನುಸರಿಸುವ ಮಾರ್ಗಸೂಚಿಗಳು ಕೆಳಕಂಡಂತಿವೆ:<br><br>ಎಂ.ಎಸ್.ಐ.ಎಲ್ ಮಳಿಗೆಗಳನ್ನು ಕರ್ನಾಟಕ ಅಬಕಾರಿ (ಭಾರತೀಯ ಮತ್ತು ವಿದೇಶಿ ಮದ್ಯಗಳ ಮಾರಾಟ) ನಿಯಮಗಳು, 1968 ರ ನಿಯಮ–3(11–ಸಿ), 8, 8(ಎ) ಹಾಗೂ ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) ನಿಯಮಗಳು, 1967ರ ನಿಯಮ–5ರ ಪ್ರಕಾರ ನಿಬಂಧನೆಗಳನ್ನು ಪಾಲಿಸಿ ಮಂಜೂರು ಮಾಡಲು ಪೂರ್ವಾನುಮತಿ ನೀಡಲಾಗುವುದು.<br><br>ಸರ್ಕಾರದ ಪತ್ರ ಸಂಖ್ಯೆ:ಎಫ್‌ಡಿ 07 ಇಎಫ್‌ಎಲ್ 2008 ದಿನಾಂಕ: 03.07.2009 ರಲ್ಲಿ ಪ್ರತಿ ತಾಲ್ಲೂಕಿಗೆ ಕನಿಷ್ಠ 2 ರಂತೆ 352 ಸನ್ನದುಗಳು, ಜಿಲ್ಲಾ ಕೇಂದ್ರಸ್ಥಾನಕ್ಕೆ 2 ರಂತೆ 58 ಸನ್ನದುಗಳು ಹಾಗೂ ಎಂಎಸ್‌ಐಎಲ್ ಸಂಸ್ಥೆ ಪ್ರಾದೇಶಿಕ ಬೇಡಿಕೆ ಅಧ್ಯಯನ ಆಧರಿಸಿ ಕೋರಿಕೆ ಸಲ್ಲಿಸುವ ಸ್ಥಳಗಳಿಗೆ 53 ಸನ್ನದುಗಳಂತೆ ಒಟ್ಟು 463 ಸನ್ನದುಗಳನ್ನು ಹಂಚಿಕೆ ಮಾಡಲಾಗಿದೆ.<br><br>ಮುಂದುವರೆದು, ಸರ್ಕಾರದ ಪತ್ರ ಸಂಖ್ಯೆ: ಎಫ್‌ಡಿ 15 ಇಎಫ್‌ಎಲ್ 2015 ದಿ:23.09.2016 ರಲ್ಲಿ ಕೆಳಕಂಡ ಷರತ್ತುಗಳ ಮೇಲೆ ಎಂ.ಎಸ್.ಐ.ಎಲ್ ಸಂಸ್ಥೆಗೆ ಒಟ್ಟು 900 ಸನ್ನದುಗಳನ್ನು ಹೆಚ್ಚುವರಿಯಾಗಿ ಮಂಜೂರು ಮಾಡಲು ಅನುಮೋದನೆ ನೀಡಲಾಗಿದೆ.<br><br>i. ಎಂ.ಎಸ್.ಐ.ಎಲ್ ಸಂಸ್ಥೆಯೇ ತನ್ನ ವಾಣಿಜ್ಯ ಕಾರ್ಯಸಾಧ್ಯತೆಗೆ ಅನುಗುಣವಾಗಿ ಸನ್ನದುಗಳ ಸ್ಥಳವನ್ನು ನಿಗಧಿಗೊಳಿಸುವುದು. ಎಂ.ಎಸ್.ಐ.ಎಲ್ ಸಂಸ್ಥೆಯ ಅಧಿಕಾರಿಗಳು ಕರ್ನಾಟಕ ಅಬಕಾರಿ |

| | | |
|---|---|---|
| | | ಕಾರ್ಯ್ದೆಯನ್ವಯ ಮದ್ಯದಂಗಡಿಗಳನ್ನು ತೆರೆಯುವ ನಿರ್ದಿಷ್ಟ ಸ್ಥಳಗಳನ್ನು ಗುರುತಿಸುವುದು.<br>ii. ಈ ರೀತಿ ಗುರುತಿಸುವ ಸ್ಥಳಗಳು ಸರ್ಕಾರವು ತಿಳಿಸಿರುವ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲೇ ಇರಬೇಕು ಹಾಗೂ ನಿಗದಿಪಡಿಸಿರುವ ಸಂಖ್ಯೆಯ ಮಿತಿಯಲ್ಲೇ ಇರಬೇಕು.<br>iii. ಒಂದು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಿಂದ ಮತ್ತೊಂದು ವಿಧಾನಸಭಾ ಕ್ಷೇತ ವ್ಯಾಪ್ತಿಗೆ ವರ್ಗಾವಣೆ ಆಗದಂತೆ ನೋಡಿಕೊಳ್ಳತಕ್ಕದ್ದು.<br>iv. ಎಂ.ಎಸ್.ಐ.ಎಲ್ ಸಂಸ್ಥೆಯಿಂದ ಸನ್ನದು ಸ್ಥಳಗಳನ್ನು ಗುರುತಿಸಿ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಿದ ನಂತರ ಅಂತಹ ಸನ್ನದು ಸ್ಥಳಗಳು ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) ನಿಯಮಗಳು, 1967ರ ನಿಯಮ 5 ರನ್ವಯ ಆಕ್ಷೇಪಣಾ ರಹಿತ ಸ್ಥಳದಲ್ಲಿರುವಂತೆ ಹಾಗೂ ಇತರೆ ಸಂಬಂಧಿಸಿದ ನಿಯಮಗಳಿಗೆ ಪೂರಕವಾಗಿರುವಂತೆ ಸಂಬಂಧಪಟ್ಟ ಅಬಕಾರಿ ಉಪ ಆಯುಕ್ತರು ನೋಡಿಕೊಳ್ಳುವುದು.<br>ಮುಂದುವರೆದು, ಸರ್ಕಾರದ ಪತ್ರ ಸಂಖ್ಯೆ: ಎಫ್‌ಡಿ 08 ಇಎಫ್‌ಎಲ್ 2020 ದಿ:08.09.2020 ರಲ್ಲಿ ಈಗಾಗಲೇ ಮಂಜೂರು ಮಾಡಿರುವ ಒಟ್ಟು 900 ಸನ್ನದುಗಳ ಪೈಕಿ ಬಾಕಿ ಉಳಿದಿರುವ 441 ಸನ್ನದುಗಳನ್ನು ಕೆಳಕಂಡ ಷರತ್ತುಗಳ ಮೇಲೆ ಪ್ರಾರಂಭಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.<br>1. ಎಂ.ಎಸ್.ಐ.ಎಲ್ ಸಂಸ್ಥೆಯೇ ತನ್ನ ವಾಣಿಜ್ಯ ಕಾರ್ಯಸಾಧ್ಯತೆಗೆ ಅನುಗುಣವಾಗಿ ಸನ್ನದುಗಳ ಸ್ಥಳವನ್ನು ನಿಗಧಿಗೊಳಿಸುವುದು. ಎಂ.ಎಸ್.ಐ.ಎಲ್ ಸಂಸ್ಥೆಯ ಅಧಿಕಾರಿಗಳು ಕರ್ನಾಟಕ ಅಬಕಾರಿ ಕಾರ್ಯ್ದೆಯನ್ವಯ ಮದ್ಯದಂಗಡಿಗಳನ್ನು ತೆರೆಯುವ ನಿರ್ದಿಷ್ಟ ಸ್ಥಳಗಳನ್ನು ಗುರುತಿಸುವುದು.<br>2. ಸಿಎಲ್-11(ಸಿ) ಕೋಟಾದಲ್ಲಿನ ಬಾಕಿ ಇರುವ 441 ಚಿಲ್ಲರೆ ಮದ್ಯ ಮಾರಾಟ ಸನ್ನದುಗಳ ಪೈಕಿ ಯಾವುದಾದರೂ ಸನ್ನದನ್ನು ಒಂದು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಿಂದ ಮತ್ತೊಂದು ವಿಧಾನಸಭಾ ಕ್ಷೇತ್ರ ವ್ಯಾಪ್ತಿಗೆ ವರ್ಗಾವಣೆ ಮಾಡುವುದಾದಲ್ಲಿ ಅದೇ ಜಿಲ್ಲೆಯ ಬೇರೆ ಯಾವುದಾದರೂ ಅಗತ್ಯವಿರುವ ವಿಧಾನಸಭಾ ಕ್ಷೇತ್ರಕ್ಕೆ ಕರ್ನಾಟಕ ಅಬಕಾರಿ (ಸನ್ನದುಗಳ |

ಸಾಮಾನ್ಯ ಷರತ್ತುಗಳು) ನಿಯಮಗಳು, 1967ರ ನಿಯಮ 5ರನ್ವಯ ಆಕ್ಷೇಪಣಾ ರಹಿತ ಸ್ಥಳಕ್ಕೆ ದಿನಾಂಕ:31.12.2020 ರೊಳಗೆ ವರ್ಗಾವಣೆ ಮಾಡಿಕೊಳ್ಳತಕ್ಕದ್ದು.

3. ಎಂ.ಎಸ್.ಐ.ಎಲ್ ಸಂಸ್ಥೆಯಿಂದ ಸನ್ನದು ಸ್ಥಳಗಳನ್ನು ಗುರುತಿಸಿ ಅಬಕಾರಿ ಇಲಾಖೆಗೆ ಸಲ್ಲಿಸಿದ ನಂತರ ಅಂತಹ ಸನ್ನದು ಸ್ಥಳಗಳು ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) ನಿಯಮಗಳು, 1967ರ ನಿಯಮ 5 ರನ್ವಯ ಆಕ್ಷೇಪಣಾ ರಹಿತ ಸ್ಥಳದಲ್ಲಿರುವಂತೆ ಹಾಗೂ ಇತರೆ ಸಂಬಂಧಿಸಿದ ನಿಯಮಗಳಿಗೆ ಪೂರಕವಾಗಿರುವಂತೆ ಸಂಬಂಧಪಟ್ಟ ಅಬಕಾರಿ ಉಪ ಆಯುಕ್ತರು ನೋಡಿಕೊಳ್ಳತಕ್ಕದ್ದು.

ಸರ್ಕಾರದ ಸುತ್ತೋಲೆ ಸಂಖ್ಯೆ: ಎಫ್‌ಡಿ 65 ಇಡಬ್ಲ್ಯೂಪಿ 2020, ದಿನಾಂಕ: 09-10-2020ರನ್ವಯ ವಿಧಿಸಿರುವ ಈ ಕೆಳಕಂಡ ಷರತ್ತುಗಳನ್ನು ದೃಢೀಕರಿಸಿಯೇ ಪ್ರಸ್ತಾವನೆಗಳನ್ನು ಸಲ್ಲಿಸಬೇಕಾಗಿ ಸರ್ಕಾರವು ಸೂಚಿಸಿರುತ್ತದೆ.

1. ಎಂ.ಎಸ್.ಐ.ಎಲ್ ಸಂಸ್ಥೆಯು ಸಿಎಲ್-11ಸಿ ಸನ್ನದಿಗಾಗಿ ಅರ್ಜಿಯನ್ನು ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) ನಿಯಮಗಳು, 1967ರ ನಿಯಮ 2ರನ್ವಯ ಮತ್ತು ಕರ್ನಾಟಕ ಅಬಕಾರಿ (ಭಾರತೀಯ ಮತ್ತು ವಿದೇಶಿ ಮದ್ಯ ಮಾರಾಟ) ನಿಯಮಗಳು, 1968ರ ನಿಯಮ 4(1)(ಬಿ)ರ ನಮೂನೆ ಸಿಎಲ್-1ಎ ರಲ್ಲಿಯೇ ಸಲ್ಲಿಸತಕ್ಕದ್ದು.
2. ಎಂ.ಎಸ್.ಐ.ಎಲ್ ಸಂಸ್ಥೆಯ ವತಿಯಿಂದ ಸಿಎಲ್-11 ಸಿ ಸನ್ನದಿಗಾಗಿ ಅರ್ಜಿ ಸಲ್ಲಿಸುವ ವ್ಯಕ್ತಿಯು ಎಂ.ಎಸ್.ಐ.ಎಲ್ ಸಂಸ್ಥೆಯ ನಿರ್ದೇಶಕ ಮಂಡಳಿಯಿಂದ ಅಧಿಕರಿಸಲ್ಪಟ್ಟಿರತಕ್ಕದ್ದು ಮತ್ತು ಅರ್ಜಿಯನ್ನು ನಮೂನೆ-ಸಿಎಲ್-1ಎರಲ್ಲಿ ಮತ್ತು ಕರ್ನಾಟಕ ಅಬಕಾರಿ (ಭಾರತೀಯ ಮತ್ತು ವಿದೇಶಿ ಮದ್ಯ ಮಾರಾಟ) ನಿಯಮಗಳು, 1968ರ ನಿಯಮ 4ರ ಘೋಷಣೆಯನ್ವಯ ಸಲ್ಲಿಸತಕ್ಕದ್ದು.
3. ಈ ರೀತಿಯಾಗಿ ಅಧೀಕರಿಸಲ್ಪಟ್ಟ ವ್ಯಕ್ತಿಯು ಸನ್ನದಿಗಾಗಿ ಅರ್ಜಿಯನ್ನು ಸಕ್ಷಮ ಪ್ರಾಧಿಕಾರಿಯಾದ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಸಲ್ಲಿಸತಕ್ಕದ್ದು.